CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಮಾರ್ಚ್ ೩, ೨೦೦೫ (ಫಾಲ್ಗುಣ ೧೨, ಶಕ ವರ್ಷ ೧೯೨೬) | ಸಂಚಿಕೆ ೯ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಕಾನೂನು ಸಚಿವಾಲಯ

**ವಿಷಯ :** ಶ್ರೀ ಎಂ. ಕೃಷ್ಣಮೂರ್ತಿ, ಕಿರಿಯ ಸಹಾಯಕ, ಕಾನೂನು ಇಲಾಖೆ ಕರ್ನಾಟಕ ಸರ್ಕಾರದ ಸಚಿವಾಲಯ, ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಡುವ ಬಗ್ಗೆ ಆದೇಶ

**ಪ್ರಸ್ತಾವನೆ:**

ಶ್ರೀ ಎಂ. ಕೃಷ್ಣಮೂರ್ತಿ, ಕಿರಿಯ ಸಹಾಯಕ, ಕಾನೂನು ಇಲಾಖೆ, ಇವರು ದಿನಾಂಕ: 18.12.2004 ರಿಂದ ಕಛೇರಿ ಕೆಲಸಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿದ್ದಾರೆ. ಇವರು ಕಛೇರಿ ಕೆಲಸಕ್ಕೆ ಅನಧಿಕೃತವಾಗಿ ಧೀರ್ಘಾವಧಿ ಗೈರು ಹಾಜರಾಗುವ ಮೂಲಕ ಸರ್ಕಾರದ ಕೆಲಸ ಕಾರ್ಯಗಳಿಗೆ ಅಡ್ಡಿಯನ್ನುಂಟು ಮಾಡಿದ್ದಾರೆ. ಅಲ್ಲದೆ ಇವರು ಹಿಂದೆ ಸಹ ಹಲವು ಬಾರಿ ಅನಧಿಕೃತವಾಗಿ ಗೈರು ಹಾಜರಾಗಿದ್ದು ಇಂತಹ ಸಂದರ್ಭಗಳ ಪುನರಾವರ್ತನೆಯಾಗದಂತೆ ನೋಡಿಕೊಳ್ಳಲು ದಿನಾಂಕ: 30.10.2004 ರಂದು ಇವರಿಗೊಂದು ಎಚ್ಚರಿಕೆ ನೋಟೀಸ್ ನೀಡಲಾಗಿತ್ತು. ಆದಾಗ್ಯೂ, ಈ ನೋಟೀಸನ್ನು ಧಿಕ್ಕರಿಸಿ, ಹಲವು ಬಾರಿ ಅನಧಿಕೃತ ಗೈರು ಹಾಜರಾಗುವ ಮೂಲಕ ದುರ್ನಡತೆ ಎಸಗಿರುವುದರಿಂದಲೂ,

ಮೇಲ್ಕಂಡ ದುರ್ನಡತೆಗಾಗಿ ಶ್ರೀ ಎಂ. ಕೃಷ್ಣಮೂರ್ತಿ, ಕಿರಿಯ ಸಹಾಯಕ, ಕರ್ನಾಟಕ ಸರ್ಕಾರದ ಸಚಿವಾಲಯ ಅವರ ವಿರುದ್ಧ ಶಿಸ್ತಿನ ಕ್ರಮ ಕೈಗೊಳ್ಳಲು ಸರ್ಕಾರ ಆಲೋಚಿಸಿದ್ದು ಅದರಂತೆ ಅವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಕ ಮಾಡಿ ದಿನಾಂಕ 03.01.2005 ರಂದು ಸರ್ಕಾರಿ ಆದೇಶ ಸಂಖ್ಯೆ: ಲಾ 47 ಎಲ್ಎಎಂ 2004ನ್ನು ಹೊರಡಿಸಲಾಗಿರುವುದರಿಂದಲೂ,

ಏತನ್ಮಧ್ಯೆ ಇಲಾಖೆಯ ಆಡಳಿತದ ಹಿತದೃಷ್ಟಿಯಿಂದ ಶ್ರೀ ಎಂ. ಕೃಷ್ಣಮೂರ್ತಿ, ಕಿರಿಯ ಸಹಾಯಕ, ಕಾನೂನು ಇಲಾಖೆ, ಇವರನ್ನು ಸ್ವೀಕೃತಿ ಮತ್ತು ರವಾನೆ ಶಾಖೆಯಿಂದ ವ್ಯಾಜ್ಯಗಳು-7 ಶಾಖೆಗೆ ದಿನಾಂಕ: 15.12.2004ರ ಅನಧಿಕೃತ ಟಿಪ್ಪಣೆ ಸಂಖ್ಯೆ: ಲಾ 98 ಎಲ್ಎಎಂ 2004ರಲ್ಲಿ ಆಂತರಿಕ ವರ್ಗಾವಣೆ ಮಾಡಲಾಯಿತು. ದಿನಾಂಕ: 15.12.2004ರ ಸದರಿ ಅನಧಿಕೃತ ಟಿಪ್ಪಣಿಯಲ್ಲಿನಂತೆ ವ್ಯಾಜ್ಯ-7 ಶಾಖೆಯಲ್ಲಿ ಕರ್ತವ್ಯಕ್ಕೆ ಹಾಜರಾಗದೆ ಅನಧಿಕೃತ ಗೈರು ಹಾಜರಾಗಿದ್ದು ಅವರನ್ನು ಅಮಾನತ್ತಿನಲ್ಲಿಡುವುದು ಅವಶ್ಯವೆಂದು ಸರ್ಕಾರ ಭಾವಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 47 ಎಲ್ಎಎಂ 2004 ಬೆಂಗಳೂರು ದಿನಾಂಕ: 25ನೇ ಜನವರಿ 2005**

ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(ಎ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು, ಶ್ರೀ ಎಂ. ಕೃಷ್ಣಮೂರ್ತಿ, ಕಿರಿಯ ಸಹಾಯಕ, ಕಾನೂನು ಇಲಾಖೆ ರವರನ್ನು ಅವರ ವಿರುದ್ಧ ಶಿಸ್ತಿನ ಕ್ರಮ: ಇಲಾಖಾ ವಿಚಾರಣೆಯನ್ನು ಬಾಕಿಯಿಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಅಮಾನತ್ತಿನಲ್ಲಿಡುತ್ತದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಎಂ. ಕೃಷ್ಣಮೂರ್ತಿ, ಕಿರಿಯ ಸಹಾಯಕ, ಅವರು ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಯ ನಿಯಮ 98ರನ್ವಯ ಜೀವನಾಧಾರ ಭತ್ಯೆಯನ್ನು ಪಡೆಯುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಎಂ. ಕೃಷ್ಣಮೂರ್ತಿ ಅವರು ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆಯದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ (ಆಡಳಿತ-1).

ಪಿ.ಆರ್.254

**ವಿಷಯ :** ಶ್ರೀ ಎಂ. ವಿ. ಕೃಷ್ಣಮೂರ್ತಿ ಶಾಖಾಧಿಕಾರಿ, ವ್ಯಾಜ್ಯ-2 ಶಾಖೆ, ಕಾನೂನು ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಡುವ ಬಗ್ಗೆ.

**ಪ್ರಸ್ತಾವನೆ:**

ಶ್ರೀ ಎಂ. ವಿ. ಕೃಷ್ಣಮೂರ್ತಿ, ಶಾಖಾಧಿಕಾರಿ, ವ್ಯಾಜ್ಯ-2 ಶಾಖೆ, ಕಾನೂನು ಇಲಾಖೆ, ಕರ್ನಾಟಕ ಸರ್ಕಾರದ ಸಚಿವಾಲಯ ಇವರ ನಿರ್ಲಕ್ಷ ಹಾಗೂ ಉದ್ದೇಶ ಪೂರ್ವಕ ಕ್ರಮದಿಂದಾಗಿ ವ್ಯಾಜ್ಯ-2 ಶಾಖೆಯಲ್ಲಿ ಬಹಳಷ್ಟು ಕಡತಗಳು ಬಾಕಿ ಉಳಿದುಕೊಂಡಿವೆ. ಕಡತಗಳನ್ನು ನಿರ್ವಹಿಸದೆ ಬಾಕಿ ಉಳಿದುಕೊಂಡಿರುವುದು ಈ ಅಧಿಕಾರಿಯ ನಿರ್ಲಕ್ಷ ಹಾಗೂ ಉದ್ದೇಶ ಪೂರ್ವಕ ಮನೋಭಾವವನ್ನು ಸೂಚಿಸುತ್ತದೆ. ಕಡತಗಳನ್ನು ಅನಾವಶ್ಯಕವಾಗಿ ಹಾಗೂ ಬಹಳಷ್ಟು ಕಾಲದಿಂದ ನಿರ್ವಹಿಸದೆ ಇದ್ದುದರಿಂದ ಕಾನೂನು ಇಲಾಖೆಗೆ ಹಾಗೂ ಸರ್ಕಾರಕ್ಕೆ ಕೆಟ್ಟ ಹೆಸರು ತಂದಿರುವುದಲ್ಲದೆ ಸರ್ಕಾರಕ್ಕೆ ಸಾಕಷ್ಟು ನಷ್ಟವೂ ಆಗಿರುತ್ತದೆ.

ಈ ಹಿನ್ನೆಲೆಯಲ್ಲಿ ಬಾಕಿ ಕಡತಗಳನ್ನು ನಿರ್ವಹಿಸದೆ ಕರ್ತವ್ಯ ಲೋಪವೆಸಗಿರುವುದನ್ನು ಸರ್ಕಾರವು ಗಂಭೀರವಾಗಿ ಪರಿಗಣಿಸಿ ಶ್ರೀಯುತರನ್ನು ಅಮಾನತ್ತಿನಲ್ಲಿಡುವುದು ಅವಶ್ಯವೆಂದು ಭಾವಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ: 44:ಎಲ್‌ಎಎಮ್:2005, ಬೆಂಗಳೂರು, ದಿನಾಂಕ; 19ನೇ ಫೆಬ್ರವರಿ 2005**

ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ, 1957ರ ನಿಯಮ 10(1)(ಡಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಂ. ವಿ. ಕೃಷ್ಣಮೂರ್ತಿ, ಶಾಖಾಧಿಕಾರಿ, ವ್ಯಾಜ್ಯ-2 ಶಾಖೆ ಕಾನೂನು ಇಲಾಖೆ ರವರನ್ನು ಅವರ ವಿರುದ್ಧ ಶಿಸ್ತಿನ ಕ್ರಮವನ್ನು ಬಾಕಿ ಇಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಈ ಮೂಲಕ ಅಮಾನತ್ತಿನಲ್ಲಿಡಲಾಗಿದೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಎಂ. ವಿ. ಕೃಷ್ಣಮೂರ್ತಿ, ಶಾಖಾಧಿಕಾರಿ ಇವರು ನಿಯಮಾವಳಿಯನ್ವಯ ಜೀವನಾಧಾರ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

ಅಮಾನತ್ತಿನ ಅವಧಿಯಲ್ಲಿ ಶ್ರೀ ಎಂ. ವಿ. ಕೃಷ್ಣಮೂರ್ತಿ ಇವರು ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆಯದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಪಿ.ಆರ್.255

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ (ಆಡಳಿತ-1).

**ವಿಷಯ :** 2004-05ನೇ ಸಾಲಿಗೆ ರಾಜ್ಯದಲ್ಲಿರುವ ವಿವಿಧ ನ್ಯಾಯವಾದಿಗಳ ಸಂಘಗಳಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ ಆದೇಶ.

**ಓದಲಾಗಿದೆ :**
1. ಅಧಿಸೂಚನೆ ಸಂಖ್ಯೆ: ಲಾ 82 ಎಲ್‌ಸಿಎಲ್ 33 ದಿನಾಂಕ: 17/18.03.03.
2. ಅಧಿಸೂಚನೆ ಸಂಖ್ಯೆ: ಲಾ 112 ಎಲ್‌ಸಿಎಲ್ 96, ದಿನಾಂಕ: 30.10.96.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ದಿನಾಂಕ: 17/18.3.03ರ ಅಧಿಸೂಚನೆಯನ್ವಯ ರಾಜ್ಯದಲ್ಲಿರುವ ವಿವಿಧ ವಕೀಲರುಗಳ ಸಂಘಗಳಿಗೆ ಕಾನೂನು ಪುಸ್ತಕ ಮತ್ತು ಪೀಠೋಪಕರಣಗಳನ್ನು ಖರೀದಿಸಲು ಸರ್ಕಾರದಿಂದ ಸಹಾಯಾನುದಾನ ನೀಡಲು ದಿ ಕರ್ನಾಟಕ ಗ್ರಾಂಟ್-ಇನ್-ಏಡ್-ಟು-ಬಾರ್ ಅಸೋಸಿಯೇಷನ್ ರೂಲ್ಸ್ 1983ನ್ನು ರಚಿಸಲಾಗಿದೆ.

2004-05ನೇ ಸಾಲಿಗೆ ಆಯವ್ಯಯದಲ್ಲಿ ರಾಜ್ಯದ ವಿವಿಧ ವಕೀಲರುಗಳ ಸಂಘಗಳಿಗೆ ಲೆಕ್ಕಶೀರ್ಷಿಕೆ 2014-00-105-0-01-059 ಇತರೆ ಖರ್ಚು (ಯೋಜನೇತರ) ಅಡಿಯಲ್ಲಿ ರೂ. 25.00 ಲಕ್ಷಗಳ ಅನುದಾನವನ್ನು ಮೀಸಲಿರಿಸಿದೆ. ಈ ಮೊತ್ತವನ್ನು ಕರ್ನಾಟಕದ ವಿವಿಧ ವಕೀಲರುಗಳ ಸಂಘಗಳಿಗೆ ಸಹಾಯಾನುದಾನ ನಿಯಮಾವಳಿಗಳು 1983ರಲ್ಲಿ ಹಾಗೂ ತದನಂತರದ ನಿಯಮಗಳ ತಿದ್ದುಪಡಿಗಳಲ್ಲಿ ನಿಗದಿಪಡಿಸಲಾಗಿರುವಂತೆ ಮೇಲೆ ಓದಲಾದ ಕ್ರಮಾಂಕ (2)ರ ದಿನಾಂಕ: 30.10.96ರ ಅಧಿಸೂಚನೆ ರೀತ್ಯ ಪ್ರಸಕ್ತ ಸಾಲಿಗೆ ಸರ್ಕಾರವು ವಿವಿಧ ವಕೀಲರ ಸಂಘಗಳಿಗೆ ಸಹಾಯಾನುದಾನ ಬಿಡುಗಡೆ ಮಾಡಬೇಕೆಂದಿರುವ ಬಗ್ಗೆ ಈ ಆದೇಶದ ಅನುಬಂಧದಲ್ಲಿ ಸೂಚಿಸಿರುವಂತೆ ಅನುದಾನ ಬಿಡುಗಡೆ ಮಾಡಲು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಲಾ 88 ಎಲ್‌ಸಿಎಲ್ 2004, ಬೆಂಗಳೂರು, ದಿನಾಂಕ: 4ನೇ ಫೆಬ್ರವರಿ 2005**

ಸರ್ಕಾರವು ರಾಜ್ಯದಲ್ಲಿರುವ ವಿವಿಧ ವಕೀಲರುಗಳ ಸಂಘಗಳಿಗೆ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ಸೂಚಿಸಿರುವಂತೆ ಸಹಾಯಾನುದಾನ ಬಿಡುಗಡೆ ಮಾಡಲು ಸಕ್ಷಮ ಪ್ರಾಧಿಕಾರಗಳಿಗೆ ಒಟ್ಟು ರೂ.22,60,000/- (ರೂ. ಇಪ್ಪತ್ತೆರಡು ಲಕ್ಷದ ಅರವತ್ತು ಸಾವಿರ ಮಾತ್ರ) ಗಳನ್ನು ಬಿಡುಗಡೆ ಮಾಡಿದೆ.

ಸಕ್ಷಮ ಪ್ರಾಧಿಕಾರಗಳು ಅಂದರೆ ಎಲ್ಲಾ ವಿಭಾಗೀಯ ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಎಲ್ಲಾ ತಾಲ್ಲೂಕು ಕೆಳಮಟ್ಟದ ನ್ಯಾಯವಾದಿಗಳ ಸಂಘಗಳಿಗೆ ಸಂಬಂಧಪಟ್ಟಂತೆ ಪ್ರಧಾನ ಜಿಲ್ಲಾ ಮತ್ತು ಸತ್ರನ್ಯಾಯಾಧೀಶರು/ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರುಗಳು ಈ ಆದೇಶದಲ್ಲಿ ಬಿಡುಗಡೆ ಮಾಡಲಾದ ಸಹಾಯಾನುದಾನವನ್ನು ಆಯಾ ನ್ಯಾಯವಾದಿಗಳ ಸಂಘಗಳಿಂದ ಅರ್ಜಿಗಳನ್ನು ಪಡೆದು ರಾಜ್ಯ ಬಾರ್ ಅಸೋಸಿಯೇಷನ್‌ಗಳಿಗೆ ಸಹಾಯಾನುದಾನ ನಿಯಮಾವಳಿಗಳು 1983 ರಲ್ಲಿ ನಿಗದಿಪಡಿಸಲಾಗಿರುವಂತೆ ತ್ವರಿತವಾಗಿ ಆರ್ಥಿಕ ವರ್ಷ ಕೊನೆಗೊಳ್ಳುವ ಮುನ್ನ ಅಂದರೆ ದಿನಾಂಕ: 31.3.2005ಕ್ಕೆ ಮೊದಲು ಮಂಜೂರು ಮಾಡತಕ್ಕದ್ದು ಹಾಗೂ ಸಂಬಂಧಪಟ್ಟ ಖಜಾನೆಗಳಿಗೆ ಬಿಲ್‌ಗಳನ್ನು ಸಲ್ಲಿಸಿ ಹಣ ಪಡೆಯತಕ್ಕದ್ದು.

2003-04ನೇ ಸಾಲಿನಲ್ಲಿ ಸಹಾಯಾನುದಾನ ಪಡೆದಿದ್ದಾಗ್ಯೂ ಸಹಾಯಾನುದಾನ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸದೇ ಇರುವ ವಕೀಲರುಗಳ ಸಂಘಗಳಿಂದ ಉಪಯೋಗಿತ ಪ್ರಮಾಣಪತ್ರ ಪಡೆದು ಪ್ರಸಕ್ತ ಸಾಲಿನ ಸಹಾಯಾನುದಾನ ಬಿಡುಗಡೆ ಮಂಜೂರು ಮಾಡುವ ಷರತ್ತಿಗೆ ಈ ಆದೇಶ ಒಳಪಟ್ಟಿದೆ.

ಪ್ರಸಕ್ತ ಆರ್ಥಿಕ ವರ್ಷ 31.3.05ರ ನಂತರ ಅನುದಾನ ಬಿಡುಗಡೆಗಾಗಿ ಸಲ್ಲಿಸುವ ಅರ್ಜಿಗಳನ್ನು ಪರಿಗಣಿಸಲಾಗದು.

ಈ ಸಹಾಯಾನುದಾನವನ್ನು ಲೆಕ್ಕ ಶೀರ್ಷಿಕೆ 2014-00-105-0-01-059 ವಕೀಲರ ಸಂಘ (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.07.96ರಲ್ಲಿನ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಎಸ್. ಈಶ್ವರಪ್ರಸಾದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ (ಆಡಳಿತ-2).

**ಸರ್ಕಾರದ ಆದೇಶ: ಲಾ 88: ಎಲ್‌ಸಿಎಲ್ 2004, ದಿನಾಂಕ: 4ನೇ ಫೆಬ್ರವರಿ 2005**

**ಅನುಬಂಧ**

**ರಾಜ್ಯದಲ್ಲಿನ ವಿವಿಧ ಮಟ್ಟದ ವಕೀಲರ ಸಂಘಗಳಿಗೆ 2004-05ನೇ ಸಾಲಿಗೆ ಬಿಡುಗಡೆ ಮಾಡಬೇಕಾದ ಅನುದಾನದ ವಿವರಗಳು.**

| ಕ್ರಮ ಸಂಖ್ಯೆ | ಜಿಲ್ಲೆ ಹೆಸರು | ವಕೀಲರುಗಳ ಸಂಘಗಳ ಸಂಖ್ಯೆ | | ಬಿಡುಗಡೆಗೊಳಿಸಬೇಕಾದ ಮೊತ್ತ |
|---|---|---|---|---|
| | | ಜಿಲ್ಲಾ ಮಟ್ಟದ ವಿಭಾಗ ವಕೀಲರು ಸಂಘಗಳು | ತಾಲ್ಲೂಕು ಮಟ್ಟದ ವಕೀಲರ ಸಂಘಗಳು | |
| 1 | 2 | 3 | 4 | 5 |
| | ಬೆಂಗಳೂರು ನಗರ ವಕೀಲರ ಸಂಘ | - | - | 1,00,000-00 |
| 1. | ಬೆಂಗಳೂರು (ಗ್ರಾಮಾಂತರ) | - | 9 | 90,000-00 |
| 2. | ಕೋಲಾರ | 1 | 11 | 1,35,000-00 |
| 3. | ತುಮಕೂರು | 1 | 9 | 1,15,000-00 |
| 4. | ಮೈಸೂರು | 1 (ವಿ.ಮ) | 6 | 90,000-00 |
| 5. | ಮಂಡ್ಯ | 1 | 6 | 85,000-00 |
| 6. | ಹಾಸನ | 1 | 7 | 95,000-00 |
| 7. | ಶಿವಮೊಗ್ಗ | 1 | 6 | 85,000-00 |
| 8. | ಚಿಕ್ಕಮಗಳೂರು | 1 | 6 | 85,000-00 |
| 9. | ಚಾಮರಾಜನಗರ | 1 | 3 | 55,000-00 |
| 10. | ಚಿತ್ರದುರ್ಗ | 1 | 5 | 75,000-00 |
| 11. | ದಾವಣಗೆರೆ | 1 | 5 | 75,000-00 |
| 12. | ಬಳ್ಳಾರಿ | 1 | 6 | 85,000-00 |
| 13. | ದಕ್ಷಿಣ ಕನ್ನಡ | 1 | 4 | 65,000-00 |
| 14. | ಉಡುಪಿ | 1 | 2 | 45,000-00 |
| 15. | ಬೆಳಗಾಂ | 1(ವಿ.ಮ) | 11 | 1,40,000-00 |
| 16. | ಧಾರವಾಡ | 1 | 3 | 55,000-00 |
| 17. | ಗದಗ್ | 1 | 4 | 65,000-00 |
| 18. | ಹಾವೇರಿ | 1 | 6 | 85,000-00 |
| 19. | ರಾಯಚೂರು | 1 | 3 | 55,000-00 |
| 20. | ಕೊಪ್ಪಳ | 1 | 4 | 65,000-00 |
| 21. | ಬೀದರ್ | 1 | 4 | 65,000-00 |
| 22. | ಉತ್ತರ ಕನ್ನಡ | 1 | 11 | 1,35,000-00 |
| 23. | ಕೊಡಗು | 1 | 2 | 45,000-00 |
| 24. | ಬಿಜಾಪುರ | 1 | 4 | 65,000-00 |
| 25. | ಬಾಗಲಕೋಟೆ | 1 | 6 | 85,000-00 |
| 26. | ಗುಲ್ಬರ್ಗ | 1 (ವಿ.ಮ) | 9 | 1,20,000-00 |
| | | | **ಒಟ್ಟು** | **22,60,000-00** |

**ಬಿ. ಎಸ್. ಈಶ್ವರಪ್ರಸಾದ್**

ಪಿ.ಆರ್.256 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-2).

**ವಿಷಯ :** ಹಾಸನ ಜಿಲ್ಲೆಯ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಲಾ 38 ಎಲ್‌ಎಸಿ 2004, ದಿನಾಂಕ: 18.5.2004
2. ಸರ್ಕಾರಿ ಆದೇಶ ಸಂಖ್ಯೆ: ಲಾ 20 ಎಲ್‌ಎಸಿ 2003, ದಿನಾಂಕ: 13.2.2004
3. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರಸಂಖ್ಯೆ: ಜಿಒಬಿ-2-408(12)2004, ದಿನಾಂಕ: 21.1.2005.

**ಪ್ರಸ್ತಾವನೆ:**

ಹಾಸನ ಜಿಲ್ಲೆಯ ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಗಳನ್ನು ಮುಂದುವರೆಸಲು ಕ್ರಮವಾಗಿ ಮೇಲೆ ಓದಲಾದ (1) ಮತ್ತು (2) ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಈ ನ್ಯಾಯಾಲಯಗಳ ಕಾರ್ಯಾವಧಿಯು ದಿನಾಂಕ: 31.3.2005ಕ್ಕೆ ಪೂರ್ಣಗೊಳ್ಳಲಿದೆ.

1) ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ಆಲೂರು

2) 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಹಾಸನ

ಸದರಿ ನ್ಯಾಯಾಲಯಗಳಿಗೆ ಮಂಜೂರಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (3)ರ ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 37 ಎಲ್‌ಎಸಿ 2005 ಬೆಂಗಳೂರು ದಿನಾಂಕ: 16ನೇ ಫೆಬ್ರವರಿ 2005**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಹಾಸನ ಜಿಲ್ಲೆಯ ಈ ಕೆಳಕಂಡ ನ್ಯಾಯಾಲಯಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿದೆ.

1) ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ ಆಲೂರು

2) 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಹಾಸನ

ಈ ನ್ಯಾಯಾಲಯಗಳ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01-ಯೋಜನೇತರ ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್ 96 ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಪಿ.ಆರ್.257

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ (ಆಡಳಿತ-1).

**ವಿಷಯ :** ಬಳ್ಳಾರಿ ಜಿಲ್ಲೆಯ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಲಾ 38 ಎಲ್‌ಎಸಿ 2004 ದಿನಾಂಕ: 18.05.2004

2. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರಸಂಖ್ಯೆ: ಜಿಒಬಿ:2:408(4) 2004, ದಿನಾಂಕ: 24.1.2005.

**ಪ್ರಸ್ತಾವನೆ:**

ಬಳ್ಳಾರಿ ಜಿಲ್ಲೆಯ ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಸದರಿ ನ್ಯಾಯಾಲಯಗಳ ಕಾರ್ಯಾವಧಿಯು ದಿನಾಂಕ: 31.3.2005ಕ್ಕೆ ಪೂರ್ಣಗೊಳ್ಳಲಿದೆ.

1) ಹೆಚ್ಚುವರಿ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಳ್ಳಾರಿ

2) ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಬಳ್ಳಾರಿ

3) 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಬಳ್ಳಾರಿ

4) ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಸಂಡೂರು

5) ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಹಗರಿ ಬೊಮ್ಮನಹಳ್ಳಿ

ಸದರಿ ನ್ಯಾಯಾಲಯಗಳಿಗೆ ಮಂಜೂರಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (2)ರ ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 38 ಎಲ್‌ಎಸಿ 2005, ಬೆಂಗಳೂರು ದಿನಾಂಕ: 16ನೇ ಫೆಬ್ರವರಿ 2005**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಪ್ರಸ್ತಾವನೆಯಲ್ಲಿ ತಿಳಿಸಿರುವ ಬಳ್ಳಾರಿ ಜಿಲ್ಲೆಯ ಐದು ನ್ಯಾಯಾಲಯಗಳಿಗೆ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿದೆ.

ಈ ನ್ಯಾಯಾಲಯದ ವೆಚ್ಚವನ್ನು ಲೆಕ್ಕಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ; 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಪಿ.ಆರ್.258

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ (ಆಡಳಿತ-1).

**ವಿಷಯ :** ರಾಜ್ಯದಲ್ಲಿ ಹೊಸದಾಗಿ ಸ್ಥಾಪಿಸಲಾಗಿರುವ ಫಾಸ್ಟ್ ಟ್ರಾಕ್ ನ್ಯಾಯಾಲಯಗಳಿಗೆ ವಿಶೇಷ ಸರ್ಕಾರಿ ಅಭಿಯೋಜಕರುಗಳನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಲಾ:11:ಎಲ್‌ಸಿಇ:2003, ದಿನಾಂಕ: 20.03.2004.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ವಿರಾಜಪೇಟೆ, ಕೊಡಗು ಜಿಲ್ಲೆ ಈ ಸ್ಥಳದಲ್ಲಿ ಹೊಸದಾಗಿ ಫಾಸ್ಟ್ ಟ್ರಾಕ್ ನ್ಯಾಯಾಲಯವನ್ನು ಸ್ಥಾಪಿಸಲು ಮಂಜೂರಾತಿ ನೀಡಲಾಗಿದೆ.

ಮೇಲೆ ತಿಳಿಸಿದ ನ್ಯಾಯಾಲಯಗಳಿಗೆ ವಿಶೇಷ ಸರ್ಕಾರಿ ಅಭಿಯೋಜಕರನ್ನು ನೇಮಕ ಮಾಡಲು ಜಿಲ್ಲಾ ನ್ಯಾಯಾಧೀಶರ ಶಿಫಾರಸ್ಸುಗಳ ಮೇರೆಗೆ ಜಿಲ್ಲಾಧಿಕಾರಿಗಳಿಂದ ತಯಾರಿಸಲ್ಪಟ್ಟ ಅರ್ಹ ಅಭ್ಯರ್ಥಿಗಳ ಪಟ್ಟಿಯನ್ನು ಪಡೆದು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ:11:ಎಲ್‌ಸಿಇ:2003, ಬೆಂಗಳೂರು, ದಿನಾಂಕ: 27ನೇ ಜನವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಕೊಡಗು ಜಿಲ್ಲೆಯ ವಿರಾಜಪೇಟೆಯಲ್ಲಿ ಹೊಸದಾಗಿ ಸ್ಥಾಪಿಸಲ್ಪಟ್ಟ ಫಾಸ್ಟ್ ಟ್ರಾಕ್ ನ್ಯಾಯಾಲಯಕ್ಕೆ ವಿಶೇಷ ಸರ್ಕಾರಿ ಅಭಿಯೋಜಕರನ್ನು ದಂಡ ಪ್ರಕ್ರಿಯಾ ಸಂಹಿತೆಯ 24ನೇ ವಿಧಿ ಹಾಗೂ ಕರ್ನಾಟಕ ಕಾನೂನು ಅಧಿಕಾರಿಗಳು (ನೇಮಕಾತಿ ಮತ್ತು ಸೇವಾ ಷರತ್ತು) ನಿಯಮ, 1977ರಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಡಿಸಿ ಈ ಕಳಗೆ ತಿಳಿಸಿರುವ ವಕೀಲರನ್ನು ವಿಶೇಷ ಸರ್ಕಾರಿ ಅಭಿಯೋಜಕರುಗಳನ್ನಾಗಿ ತಕ್ಷಣ ಜಾರಿಗೆ ಬರುವಂತೆ ನೇಮಕ ಮಾಡಲಾಗಿದೆ.

| ಕ್ರಮ ಸಂಖ್ಯೆ | ಜಿಲ್ಲೆ/ಸ್ಥಳ | ನೇಮಕ ಮಾಡಲಾಗಿರುವ ವಕೀಲರ ಹೆಸರು ಮತ್ತು ವಿಳಾಸ | ನೇಮಕ ಮಾಡಿರುವ ನ್ಯಾಯಾಲಯ |
|---|---|---|---|
| 1 | ಕೊಡಗು ಜಿಲ್ಲೆ, ವಿರಾಜಪೇಟೆ | ಶ್ರೀ ಎಂ. ಎಸ್. ವೆಂಕಟೇಶ್ ವಕೀಲರು, ನಂ.7, ಎಸ್.ಎಂ.ಒ. ಕಾಂಪ್ಲೆಕ್ಸ್ ಸಿದ್ದಾಪುರ, ವಿರಾಜಪೇಟೆ, ಕೊಡಗು ಜಿಲ್ಲೆ. | ವಿರಾಜಪೇಟೆ ಫಾಸ್ಟ್ ಟ್ರಾಕ್ ನ್ಯಾಯಾಲಯ |

ವಿಶೇಷ ಸರ್ಕಾರಿ ಅಭಿಯೋಜಕರನ್ನು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ನೇಮಕ ಮಾಡಲಾಗಿದೆ.

1. ರೀಟೈನರ್ ಫೀ ರೂ. 4000/- (ರೂಪಾಯಿ ನಾಲ್ಕು ಸಾವಿರ) ಹಾಗೂ ಪ್ರತಿ ದಿನವೊಂದಕ್ಕೆ ಸೆಷನ್ಸ್ ಪ್ರಕರಣದ ವಿಚಾರಣೆಗೆ ಸಂಬಂಧಿಸಿದಂತೆ ಮತ್ತು ಕ್ರಿಮಿನಲ್ ಅರ್ಜಿಗಳು/ಅಪೀಲುಗಳಿಗೆ ಸಂಬಂಧಿಸಿದಂತೆ ಸೆಷನ್ ಕೋರ್ಟಿಗೆ ಹಾಜರಾದಂತಹ ದಿನಗಳಲ್ಲಿ ದಿನವೊಂದಕ್ಕೆ ರೂ.75/- (ಎಪ್ಪತ್ತೈದು) ಮತ್ತು ಮಾಸಿಕ ಕನಿಷ್ಠ ರೂ.500/- (ರೂಪಾಯಿ ಐದು ನೂರು) ಗರಿಷ್ಠ ರೂ.3000/- (ಮೂರು ಸಾವಿರ) ರಂತೆ ಲೆಕ್ಕಹಾಕಿ ಪಡೆಯತಕ್ಕದ್ದು. ಇದರಲ್ಲಿ ರೀಟೈನರ್ ಫೀ ಹೊರತಾಗಿದೆ.
2. ಕೋರ್ಟಿಗೆ ಹಾಜರಾತಿ ಪ್ರಕರಣಕ್ಕೆ ಸಂಬಂಧಿಸಿದಂತೆ ಗರಿಷ್ಟವಾದ ವಿವಾದ ನಡೆಯದಂತೆ ಪ್ರಕರಣ ಮುಂದೂಡಲ್ಪಟ್ಟಿದ್ದಲ್ಲಿ, ಯಾವುದೇ ಫೀಯನ್ನು ಪಡೆಯಲು ಅರ್ಹರಿರುವುದಿಲ್ಲ. ಆದರೆ, ಕೇಂದ್ರ ಸ್ಥಾನದಿಂದ ಹೊರಗಡೆ ಪ್ರಕರಣ ನಡೆಸಿದ್ದಲ್ಲಿ ಪ್ರಕರಣ ಮುಂದೂಡಲ್ಪಟ್ಟರೂ ಸಹ ದಿನವೊಂದಕ್ಕೆ ರೂ. 50/- (ಐವತ್ತು) ಪಡೆಯಲು ಅರ್ಹರಿರುತ್ತಾರೆ.
3. ವಿಶೇಷ ಸರ್ಕಾರಿ ಅಭಿಯೋಜಕರ ಹುದ್ದೆಯನ್ನು ಅವರು ಕರ್ತವ್ಯಕ್ಕೆ ಹಾಜರಾದ ದಿನಾಂಕ ಅಥವಾ ನ್ಯಾಯಾಲಯವು ಕೆಲಸ ನಿರ್ವಹಿಸಲು ಪ್ರಾರಂಭಿಸಿದ ದಿನಾಂಕ ಈ ಎರಡರಲ್ಲಿ ಯಾವುದು ನಂತರವೋ ಆ ದಿನಾಂಕದಿಂದ ಎರಡು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಈ ಎರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಎಂದು ನಿಗದಿಪಡಿಸಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2014-00-800-1-00-101 ಸಹಾಯಾನುಧಾನ ಇದರಡಿಯಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಪಿ.ಆರ್.259

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ (ಆಡಳಿತ-1).

**ವಿಷಯ :** ಬೆಂಗಳೂರು ನಗರ ಸಿವಿಲ್ ನ್ಯಾಯಾಲಯದ ಉಪ ಸಂಕೀರ್ಣಕ್ಕೆ ಸೃಜಿಸಲಾಗಿರುವ 2 ಲಿಫ್ಟ್ ಅಟೆಂಡರ್ ಹುದ್ದೆಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಲಾ:201:ಎಲ್‌ಎಸಿ:2002 ದಿನಾಂಕ: 8.10.2002
2. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರಸಂಖ್ಯೆ: ಎಲ್‌ಸಿಎ-2-179:95, ದಿನಾಂಕ: 29.10.2004.

**ಪ್ರಸ್ತಾವನೆ:**

ಬೆಂಗಳೂರು ನಗರ ಸಿವಿಲ್ ನ್ಯಾಯಾಲಯದ ಉಪಸಂಕೀರ್ಣಕ್ಕೆ ಸೃಜಿಸಲಾಗಿರುವ 2 ಲಿಫ್ಟ್ ಅಟೆಂಡರ್ ಹುದ್ದೆಗಳನ್ನು ಮುಂದುವರೆಸಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಸದರಿ ನ್ಯಾಯಾಲಯದ ಕಾರ್ಯಾವಧಿಯು ದಿನಾಂಕ: 22.3.2004ಕ್ಕೆ ಪೂರ್ಣಗೊಂಡಿರುತ್ತದೆ.

ಬೆಂಗಳೂರು ನಗರ ಸಿವಿಲ್ ನ್ಯಾಯಾಲಯದ ಉಪ ಸಂಕೀರ್ಣಕ್ಕೆ ಸೃಜಿಸಲಾಗಿರುವ 2 ಲಿಫ್ಟ್ ಅಟೆಂಡರ್ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 23.3.2004 ರಿಂದ ಒಂದು ವರ್ಷ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (2)ರ ಪತ್ರದಲ್ಲಿ ಕೋರಲಾಗಿದೆ.

ಸರ್ಕಾರಿ ಆದೇಶ ಸಂಖ್ಯೆ: ಲಾ 113:ಎಲ್‌ಎಸಿ:2004, ಬೆಂಗಳೂರು ದಿನಾಂಕ: 20ನೇ ಡಿಸೆಂಬರ್ 2004

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಬೆಂಗಳೂರು ನಗರ ಸಿವಿಲ್ ನ್ಯಾಯಾಲಯದ ಕಟ್ಟಡದಲ್ಲಿನ ಲಿಫ್ಟ್ ಚಾಲನೆಗೆ ಸೃಜಿಸಲಾಗಿರುವ ಎರಡು ಲಿಫ್ಟ್ ಚಾಲಕರ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 23.3.2004 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಿದೆ.

ಈ ನ್ಯಾಯಾಲಯದ ವೆಚ್ಚವನ್ನು ಲೆಕ್ಕಶೀರ್ಷಿಕೆ “2014-00-105-0-01-ಯೋಜನೇತರ” ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಪಿ.ಆರ್.260

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ (ಆಡಳಿತ-1).

**ವಿಷಯ :** ಬೆಂಗಳೂರು ವಿಶೇಷ ಜೆಎಂಎಫ್‌ಸಿ (ಮಾರಾಟ ತೆರಿಗೆ) ನ್ಯಾಯಾಲಯದ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಲಾ:217: ಎಲ್‌ಎಸಿ 2003, ದಿನಾಂಕ: 28.4.2004.
2. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರಸಂಖ್ಯೆ:ಜಿಒಬಿ:2:396:2004, ದಿನಾಂಕ: 17.04.2004.

**ಪ್ರಸ್ತಾವನೆ:**

ಬೆಂಗಳೂರಿನ ವಿಶೇಷ ಜೆಎಂಎಫ್‌ಸಿ (ಮಾರಾಟತೆರಿಗೆ) ನ್ಯಾಯಾಲಯವನ್ನು ಮುಂದುವರೆಸಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಸದರಿ ನ್ಯಾಯಾಲಯದ ಕಾರ್ಯಾವಧಿಯು ದಿನಾಂಕ: 27.3.2006ಕ್ಕೆ ಪೂರ್ಣಗೊಳ್ಳಲಿದೆ.

ಸದರಿ ನ್ಯಾಯಾಲಯಕ್ಕೆ ಮಂಜೂರಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಹುದ್ದೆಗಳನ್ನು ದಿನಾಂಕ: 28.3.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (2)ರ ಪತ್ರದಲ್ಲಿ ಕೋರಲಾಗಿದೆ.

ಸರ್ಕಾರಿ ಆದೇಶ ಸಂಖ್ಯೆ: ಲಾ 132 ಎಲ್‌ಎಸಿ 2004, ಬೆಂಗಳೂರು ದಿನಾಂಕ: 18ನೇ ಡಿಸೆಂಬರ್ 2004

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಬೆಂಗಳೂರಿನ ವಿಶೇಷ ಜೆಎಂಎಫ್‌ಸಿ (ಮಾರಾಟ ತೆರಿಗೆ) ನ್ಯಾಯಾಲಯದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅದಕ್ಕೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 28.3.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿದೆ.

ಈ ನ್ಯಾಯಾಲಯದ ವೆಚ್ಚವನ್ನು ಲೆಕ್ಕಶೀರ್ಷಿಕೆ"2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಪಿ.ಆರ್.261

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ (ಆಡಳಿತ-1).

**ವಿಷಯ :** ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ: ಲಾ 21 ಎಲ್‌ಎಸಿ 2004, ದಿನಾಂಕ: 7.8.2004.

2. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರಸಂಖ್ಯೆ: ಜೆಒಬಿ-2-408(2) 2004, ದಿನಾಂಕ:12.1.2005.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸಲು ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು, ಸದರಿ ನ್ಯಾಯಾಲಯಗಳ ಕಾರ್ಯಾವಧಿಯು ದಿನಾಂಕ: 31.3.2005ಕ್ಕೆ ಪೂರ್ಣಗೊಳ್ಳಲಿದೆ.

1) 2ನ್ನು ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

2) ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಆನೇಕಲ್

ಸದರಿ ನ್ಯಾಯಾಲಯಗಳಿಗೆ ಮಂಜೂರಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (2)ರ ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 42 ಎಲ್‌ಎಸಿ 2005, ಬೆಂಗಳೂರು ದಿನಾಂಕ: 16ನೇ ಫೆಬ್ರವರಿ 2005**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಈ ಕೆಳಕಂಡ ನ್ಯಾಯಾಲಯಗಳ ಪ್ರಿಸೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 1.4.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿದೆ.

1) 2ನ್ನು ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು.

2) ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆಎಂಎಫ್‌ಸಿ, ಆನೇಕಲ್

ಈ ನ್ಯಾಯಾಲಯಗಳ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2014-00-105-0-01 ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.1996 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕಹನುಮಂತಯ್ಯ**

ಪಿ.ಆರ್.262

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ (ಆಡಳಿತ-1).

## ಶಿಕ್ಷಣ ಸಚಿವಾಲಯ

**ವಿಷಯ :** ಶ್ರೀಮತಿ ಪ್ರತಿಭಾಕುಮಾರಿ ಅರ್ಥಶಾಸ್ತ್ರ ಹಿರಿಯ ಶ್ರೇಣಿ ಉಪನ್ಯಾಸಕರು, ಬಾಲಕರ ಸರ್ಕಾರಿ ಕಾಲೇಜು ಮಂಡ್ಯ-ಇವರ ಹೆಸರನ್ನು ಬದಲಾವಣೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ: ಕಾಶಿಇ:104: ಹೆಸರು ಬದಲಾವಣೆ: ಸಿವಿ-2: 2004-05 ದಿನಾಂಕ:4.09.2004.

2. ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 3 ಡಿಸಿಎನ್ 80 ದಿನಾಂಕ: 7.5.80.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ: 04.09.2004ರ ಕಾಲೇಜು ಶಿಕ್ಷಣ ಆಯುಕ್ತರ ಪತ್ರದಲ್ಲಿ ಪ್ರತಿಭಾಕುಮಾರಿ ಅರ್ಥಶಾಸ್ತ್ರ ಹಿರಿಯ ಶ್ರೇಣಿ ಉಪನ್ಯಾಸಕರು, ಬಾಲಕರ ಸರ್ಕಾರಿ ಕಾಲೇಜು, ಮಂಡ್ಯ ಇವರು ಪಾರ್ಶ್ವನಾಥ ಎಂಬುವರೊಂದಿಗೆ ವಿವಾಹವಾಗಿದ್ದು, ವಿವಾಹದ ನಂತರ ಇವರ ಹೆಸರಿನ ಮುಂದೆ ಇವರ ಪತಿಯ ಹೆಸರನ್ನು ಸೇರಿಸಿ ಪ್ರತಿಭಾಪಾರ್ಶ್ವನಾಥ ಎಂದು ಬದಲಾಯಿಸಿಕೊಳ್ಳಲು ಇಚ್ಛಿಸಿರುವುದಾಗಿ ತಿಳಿಸಿ ಇದಕ್ಕೆ ಸಂಬಂಧಿಸಿದ ದಾಖಲೆಗಳನ್ನು ಒದಗಿಸಿರುತ್ತಾರೆ. ಮೇಲೆ ಓದಲಾದ (2)ರ ದಿನಾಂಕ: 07.05.80ರ ಸರ್ಕಾರಿ ಆದೇಶದನ್ವಯ ಇಂತಹ ಪ್ರಕರಣಗಳಿಗೆ ಸಂಬಂಧಿಸಿದಂತೆ ಅವಕಾಶ ಕಲ್ಪಿಸಲಾಗಿದೆ.

ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲು ನಿರ್ಣಯಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 203 ಡಿಸಿಇ 2004 ಬೆಂಗಳೂರು, ದಿನಾಂಕ: 17ನೇ ಫೆಬ್ರವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀಮತಿ ಪ್ರತಿಭಾಕುಮಾರಿ ಅರ್ಥಶಾಸ್ತ್ರ ಹಿರಿಯ ಶ್ರೇಣಿ ಉಪನ್ಯಾಸಕರು, ಬಾಲಕರ ಸರ್ಕಾರಿ ಕಾಲೇಜು, ಮಂಡ್ಯ ಇವರ ಹೆಸರನ್ನು ಪ್ರತಿಭಾಪಾರ್ಶ್ವನಾಥ ಎಂದು ಬದಲಾಯಿಸಿಕೊಳ್ಳಲು ಸರ್ಕಾರವು ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮೇರಿ ಜಾಯ್ಸ್**

ಪಿ.ಆರ್.264 ಸರ್ಕಾರದ ಉಪ ಕಾರ್ಯದರ್ಶಿ-4,

ಶಿಕ್ಷಣ ಇಲಾಖೆ.

**ವಿಷಯ :** ಶ್ರೀಮತಿ ವಿಜಯನಾಗಭೂಷಣ್ ಅರ್ಥಶಾಸ್ತ್ರ ಹಿರಿಯ ಶ್ರೇಣಿ ಉಪನ್ಯಾಸಕರು, ಸರ್ಕಾರಿ ಮಹಿಳಾ ಕಾಲೇಜು ಕೋಲಾರ ಇವರ ಹೆಸರನ್ನು ಅಧಿಕೃತವಾಗಿ ಬದಲಾವಣೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಕಾಲೇಜು ಶಿಕ್ಷಣ ಆಯುಕ್ತರ ಕಡತ ಸಂಖ್ಯೆ: ಕಾಶಿಇ:251:ಸಿವಿ-2: 2004 ದಿನಾಂಕ: 26.10.2004.

2. ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 3 ಡಿಸಿಎನ್ 80 ದಿನಾಂಕ: 7.5.80.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ: 26.10.2004ರ ಕಾಲೇಜು ಶಿಕ್ಷಣ ಆಯುಕ್ತರ ಕಡತದಲ್ಲಿ ಶ್ರೀಮತಿ ವಿಜಯನಾಗಭೂಷಣ್ ಅರ್ಥಶಾಸ್ತ್ರ ಹಿರಿಯ ಶ್ರೇಣಿ ಉಪನ್ಯಾಸಕರು, ಸರ್ಕಾರಿ ಮಹಿಳಾ ಕಾಲೇಜು, ಕೋಲಾರ ಇವರ ಹೆಸರು ಎಸ್.ಎಸ್.ಎಲ್.ಸಿ. ಅಂಕಪಟ್ಟಿಯಲ್ಲಿ ವಿಜಯಾ. ಎನ್. ಎಂದಿದ್ದು ಇವರು ನಾಗಭೂಷಣ್ ಎಂಬುವವರೊಂದಿಗೆ ವಿವಾಹವಾಗಿದ್ದು, ವಿವಾಹದ ನಂತರ ಇವರ ಹೆಸರಿನ ಮುಂದೆ ಅವರ ಪತಿಯ ಹೆಸರನ್ನು ಸೇರಿಸಿ ವಿಜಯಾನಾಗಭೂಷಣ್ ಎಂದು ಸೇರಿಸಿಕೊಂಡಿರುವುದಾಗಿ, ಆದರೆ ಅಧಿಕೃತವಾಗಿ ಹೆಸರನ್ನು ಬದಲಾಯಿಸಿ ಕರ್ನಾಟಕ ರಾಜ್ಯಪತ್ರದಲ್ಲಿ ಅಧಿಸೂಚನೆ ಹೊರಡಿಸುವಂತೆ ಕೋರಿದ್ದಾರೆ ಹಾಗೂ ಇದಕ್ಕೆ ಸಂಬಂಧಿಸಿದ ದಾಖಲೆಗಳನ್ನು ಒದಗಿಸಿರುತ್ತಾರೆ. ಮೇಲೆ ಓದಲಾದ (2)ರ ದಿನಾಂಕ: 7.05.80ರ ಸರ್ಕಾರಿ ಆದೇಶದಲ್ಲಿ ಇಂತಹ ಪ್ರಕರಣಗಳಿಗೆ ಸಂಬಂಧಿಸಿದಂತೆ ಅವಕಾಶ ಕಲ್ಪಿಸಲಾಗಿದೆ.

ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲು ನಿರ್ಣಯಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 204 ಡಿಸಿಇ 2004 ಬೆಂಗಳೂರು ದಿನಾಂಕ: 17ನೇ ಫೆಬ್ರವರಿ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀಮತಿ ವಿಜಯನಾಗಭೂಷಣ್ ಅರ್ಥಶಾಸ್ತ್ರ ಹಿರಿಯ ಶ್ರೇಣಿ ಉಪನ್ಯಾಸಕರು, ಸರ್ಕಾರಿ ಮಹಿಳಾ ಕಾಲೇಜು, ಕೋಲಾರ ಇವರ ಹೆಸರನ್ನು ವಿಜಯಾನಾಗಭೂಷಣ್ ಎಂದು ಅಧಿಕೃತವಾಗಿ ಹೆಸರು ಬದಲಾಯಿಸಿಕೊಳ್ಳಲು ಸರ್ಕಾರವು ಅನುಮತಿ ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮೇರಿ ಜಾಯ್ಸ್**

ಪಿ.ಆರ್.265 ಸರ್ಕಾರದ ಉಪ ಕಾರ್ಯದರ್ಶಿ-4,

ಶಿಕ್ಷಣ ಇಲಾಖೆ.

**ವಿಷಯ :** ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ವಿವಿಧ ವೃಂದದಲ್ಲಿ ಖಾಲಿಯಿರುವ ಹುದ್ದೆಗಳಲ್ಲಿನ ಶೇ. 20ರಷ್ಟು ಹುದ್ದೆಗಳನ್ನು ಕಡಿತಗೊಳಿಸುವ ಬಗ್ಗೆ.

**ಓದಲಾಗಿದೆ :** ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರ ಪತ್ರ ಸಂಖ್ಯೆ: ಸಿ5(1) ಸಿಬ್ಬಂದಿ:ಕ33:99-2000: ದಿನಾಂಕ: 15.1.2005.

**ಪೀಠಿಕೆ:**

ದಿನಾಂಕ: 27.3.2000 ರಂದು ಸನ್ಮಾನ್ಯ ಮುಖ್ಯಮಂತ್ರಿಯವರು 2000-01ನೇ ಸಾಲಿನ ಆಯವ್ಯಯ ಭಾಷಣ ಮಾಡುವಾಗ ಸರ್ಕಾರದ ವಿವಿಧ ಇಲಾಖೆಗಳಲ್ಲಿ ಕಳೆದ 6 ವರ್ಷಗಳಿಂದ ಖಾಲಿಯಿರುವ 80 ಸಾವಿರ ಹುದ್ದೆಗಳಲ್ಲಿ ಶೇ. 20ರಷ್ಟು ಹುದ್ದೆಗಳನ್ನು ಉಳಿಸಿಕೊಂಡು ಉಳಿದ ಶೇ. 80ರಷ್ಟು ಹುದ್ದೆಗಳನ್ನು ರದ್ದುಗೊಳಿಸಲಾಗುವುದೆಂದು ಪ್ರಸ್ತಾಪಿಸಿದ್ದರು.

ದಿನಾಂಕ: 5.12.2003 ರಂದು ನಡೆಯಲಾದ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿನ ಸಭೆಯಲ್ಲಿ ಶಿಕ್ಷಣ ಇಲಾಖೆಗೆ ಸಂಬಂಧಿಸಿದಂತೆ ಶೇ. 80ರಷ್ಟು ಹುದ್ದೆಗಳನ್ನು ಉಳಿಸಿಕೊಳ್ಳಲು ಇನ್ನುಳಿದ ಶೇ. 20ರಷ್ಟು ಹುದ್ದೆಗಳನ್ನು ಮಾತ್ರ ರದ್ದುಗೊಳಿಸಲು ತೀರ್ಮಾನ ಕೈಗೊಳ್ಳಲಾಗಿದೆ.

ಮೇಲೆ ವಿವರಿಸಲಾಗಿರುವ ಕಾರಣಗಳ ಹಿನ್ನೆಲೆಯಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖಾ ಆಯುಕ್ತರು, ಬೆಂಗಳೂರು ಇವರು ದಿನಾಂಕ: 15.1.2005ರ ಪತ್ರದಲ್ಲಿ ದಿನಾಂಕ: 1.4.2000 ರಂದು ಹಾಗೂ ಸದರಿ ದಿನಾಂಕಕ್ಕೆ ಹಿಂದಿನ 6 ವರ್ಷಗಳ ಅವಧಿಯಲ್ಲಿ ಸತತವಾಗಿ ಖಾಲಿ ಇದ್ದ ಹುದ್ದೆಗಳ ಮಾಹಿತಿಯನ್ನು ನೀಡಿದ್ದು, ಆ ದಿನಾಂಕದಂದು ಡಿ. ದರ್ಜೆ ನೌಕರರು/ಅಟೆಂಡರ್ ಹುದ್ದೆಗಳು 98 ಖಾಲಿಯಿದ್ದುದಾಗಿ ತಿಳಿಸಿರುತ್ತಾರೆ. ಇದರಿಂದಾಗಿ ಆ ಹುದ್ದೆಗಳ ಶೇ. 20 ರಷ್ಟು ಹುದ್ದೆಗಳನ್ನು ರದ್ದುಪಡಿಸಬೇಕಿದೆ.

ಮೇಲೆ ವಿವರಿಸಲಾಗಿರುವ ಕಾರಣಗಳಿಂದಾಗಿ ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿನ ರದ್ದುಪಡಿಸಲಿರುವ 19 ಅಟೆಂಡರ್: ಗ್ರೂಪ್ ಡಿ ಹುದ್ದೆಗಳನ್ನು ಗುರುತಿಸುವ ಜವಾಬ್ದಾರಿಯನ್ನು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಇವರಿಗೆ ವಹಿಸುವ ಮೂಲಕ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 146 ಡಿಪಿಐ 2005, ಬೆಂಗಳೂರು ದಿನಾಂಕ: 21ನೇ ಫೆಬ್ರವರಿ 2005**

ಮೇಲೆ ವಿವರಿಸಲಾಗಿರುವ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿನ 19 ಡಿ ವರ್ಗದ: ಅಟೆಂಡರ್ ಹುದ್ದೆಗಳನ್ನು ಪೀಠಿಕೆಯಲ್ಲಿ ಪ್ರಸ್ತಾಪಿಸಿರುವ ಷರತ್ತಿಗೊಳಪಟ್ಟು ರದ್ದುಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಫ್. ಆರ್. ಸಂಬರಗಿ**

ಪಿ.ಆರ್.266 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಸೇವೆಗಳು).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿ ಅಸ್ತಿತ್ವದಲ್ಲಿರುವ ಅಪರ ಕಾರ್ಯದರ್ಶಿ ಹುದ್ದೆಯನ್ನು ರದ್ದುಪಡಿಸಿ ಕಾರ್ಯದರ್ಶಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :** 1. ಅಧಿಸೂಚನೆ ಸಂಖ್ಯೆ: ಡಿಪಿಎಆರ್:672 ಎಸ್‌ಎಎಸ್ 2004 ದಿನಾಂಕ: 1.1.2005.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಅಧಿಸೂಚನೆಯಲ್ಲಿ ಶ್ರೀ ಜಾವೇದ್ ಅಖ್ತರ್, ಐ.ಎ.ಎಸ್. ಇವರನ್ನು ಮುಖ್ಯ ಮಂತ್ರಿಗಳ ಸಚಿವಾಲಯದಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ಅಪರ ಕಾರ್ಯದರ್ಶಿ ಹುದ್ದೆಯನ್ನು ಕಾರ್ಯದರ್ಶಿ ಹುದ್ದೆ ಎಂದು ಉನ್ನತೀಕರಿಸಿದ ಹುದ್ದೆಯಲ್ಲಿ (ವೇತನ ಶ್ರೇಣಿ ರೂ.18400-22400) ನೇಮಿಸಿದೆ.

ಈ ಕಾರಣದಿಂದಾಗಿ ಮುಖ್ಯ ಮಂತ್ರಿಗಳ ಸಚಿವಾಲಯದಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ಅಪರ ಕಾರ್ಯದರ್ಶಿ ಹುದ್ದೆಯನ್ನು ರದ್ದುಪಡಿಸಿ ಕಾರ್ಯದರ್ಶಿ ಹುದ್ದೆಯನ್ನು ಸೃಜಿಸುವ ಬಗ್ಗೆ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 5 ಸಸಿವಿ 2005 ಬೆಂಗಳೂರು ದಿನಾಂಕ: 16ನೇ ಫೆಬ್ರವರಿ 2005**

ಅಧಿಸೂಚನೆ ಸಂಖ್ಯೆ: ಡಿಪಿಎಆರ್ 672 ಎಸ್‌ಎಎಸ್ 2004, ದಿನಾಂಕ: 1.1.2005ರಲ್ಲಿ ಶ್ರೀ ಜಾವೇದ್ ಅಖ್ತರ್, ಐ.ಎ.ಎಸ್. ಇವರನ್ನು ಮುಖ್ಯ ಮಂತ್ರಿಯವರ ಸಚಿವಾಲಯದ ಕಾರ್ಯದರ್ಶಿ ಹುದ್ದೆಗೆ ನೇಮಿಸಿರುವ ಹಿನ್ನೆಲೆಯಲ್ಲಿ ಪ್ರಸ್ತುತ ಮುಖ್ಯ ಮಂತ್ರಿಯವರ ಸಚಿವಾಲಯದಲ್ಲಿ ತಾತ್ಕಾಲಿಕವಾಗಿ ಅಸ್ತಿತ್ವದಲ್ಲಿರುವ ಅಪರ ಕಾರ್ಯದರ್ಶಿ ಹುದ್ದೆಯನ್ನು ರದ್ದುಪಡಿಸಿ, ಬಡ್ತಿ ಹುದ್ದೆಯಲ್ಲಿ ಶ್ರೀ ಜಾವೇದ್ ಅಖ್ತರ್, ಐ.ಎ.ಎಸ್. ಇವರು ಕಾರ್ಯವರದಿ ಮಾಡಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಕಾರ್ಯದರ್ಶಿ ಹುದ್ದೆಯನ್ನು ಸೃಜಿಸಲು ಮಂಜೂರಾತಿ ನೀಡಲಾಗಿದೆ.

ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 149 ವೆಚ್ಚ-5: 2005, ದಿನಾಂಕ: 9.2.2005ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು. ಪಿ. ಪ್ರಭು**

ಪಿ.ಆರ್.270 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

**ವಿಷಯ :** ಚಿತ್ರದುರ್ಗ ಜಿಲ್ಲಾ ತರಬೇತಿ ಸಂಸ್ಥೆಯ ಕಟ್ಟಡ ನಿರ್ಮಾಣ ಕೈಗೊಳ್ಳಲು ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :** 1. ದಿನಾಂಕ: 26.9.2003 ಮತ್ತು ದಿನಾಂಕ: 18.1.2005ರ ಪತ್ರ ಸಂಖ್ಯೆ: ಜಿತಅ(2) ವಿವ/ಬಿಎಲ್‌ಡಿ/101/93-94, ಮೈಸೂರಿನ ಆಡಳಿತ ತರಬೇತಿ ಸಂಸ್ಥೆಯ ಮಹಾ ನಿರ್ದೇಶಕರಿಂದ.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ: 26.9.2003ರ ಹಾಗೂ 18.1.2005ರ ತಮ್ಮ ಪತ್ರದಲ್ಲಿ ಮಹಾ ನಿರ್ದೇಶಕರು ಆಡಳಿತ ತರಬೇತಿ ಸಂಸ್ಥೆ, ಮೈಸೂರು ಇವರು ಚಿತ್ರದುರ್ಗ ಜಿಲ್ಲಾ ತರಬೇತಿ ಸಂಸ್ಥೆಯ ಆಡಳಿತ ಕಚೇರಿ ಹಾಗೂ ತರಬೇತಿ ಕಟ್ಟಡಗಳ ನಿರ್ಮಾಣಕ್ಕೆ 85.00 ಲಕ್ಷ ರೂ.ಗಳ ಹಾಗೂ ವಸತಿ ನಿಲಯ ಕಟ್ಟಡ ನಿರ್ಮಾಣಕ್ಕೆ 45.00 ಲಕ್ಷ ರೂ.ಗಳ ಅಂದಾಜು ಪಟ್ಟಿಯನ್ನು ಕಳುಹಿಸುತ್ತಾ, ಚಿತ್ರದುರ್ಗ ಜಿಲ್ಲಾ ತರಬೇತಿ ಸಂಸ್ಥೆಯ ಕಟ್ಟಡ ಹಾಗೂ ವಸತಿ ನಿಲಯದ ಕಟ್ಟಡ ನಿರ್ಮಾಣಕ್ಕೆ ಆಡಳಿತಾತ್ಮಕ ಅನುಮೋದನೆಯನ್ನು ನೀಡುವಂತೆ ಕೋರಿದ್ದಾರೆ. 2004-05ನೇ ಸಾಲಿನ ಆಯವ್ಯಯದಲ್ಲಿ ಚಿತ್ರದುರ್ಗ ಜಿಲ್ಲಾ ತರಬೇತಿ ಸಂಸ್ಥೆಯ ಕಟ್ಟಡ ನಿರ್ಮಾಣಕ್ಕಾಗಿ ಅನುದಾನ ಲಭ್ಯವಿರುವುದರಿಂದ 130 ಲಕ್ಷ ರೂ.ಗಳ ಈ ಕಾಮಗಾರಿಗಾಗಿ ಆಡಳಿತಾತ್ಮಕ ಮಂಜೂರಾತಿಯನ್ನು ನೀಡುವಂತೆ ಸರ್ಕಾರವನ್ನು ಕೋರಿದ್ದಾರೆ. ಮಹಾ ನಿರ್ದೇಶಕರು ಆಡಳಿತ ತರಬೇತಿ ಸಂಸ್ಥೆ, ಮೈಸೂರು, ಇವರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 92 ಜಿತಅ 2003 ಬೆಂಗಳೂರು, ದಿನಾಂಕ: 19ನೇ ಫೆಬ್ರವರಿ 2005**

ಚಿತ್ರದುರ್ಗ ಜಿಲ್ಲಾ ತರಬೇತಿ ಸಂಸ್ಥೆಯ ಕಟ್ಟಡದ ಕಾಮಗಾರಿಯನ್ನು 2004-05ನೇ ಸಾಲಿನಲ್ಲಿ ಒಟ್ಟು 130.00 ಲಕ್ಷ ರೂ.ಗಳ (ಒಂದು ನೂರ ಮುವತ್ತು ಲಕ್ಷ ರೂಪಾಯಿಗಳು ಮಾತ್ರ) ವೆಚ್ಚದಲ್ಲಿ (ಚಿತ್ರದುರ್ಗ ಜಿಲ್ಲಾ ತರಬೇತಿ ಸಂಸ್ಥೆಯ ಆಡಳಿತ ಕಚೇರಿ ಹಾಗೂ ತರಬೇತಿ ಕಟ್ಟಡಗಳ ನಿರ್ಮಾಣಕ್ಕೆ 85.00 ಲಕ್ಷ ರೂ.ಗಳು ಹಾಗೂ ವಸತಿ ನಿಲಯ ಕಟ್ಟಡ ನಿರ್ಮಾಣಕ್ಕೆ 45.00 ಲಕ್ಷ ರೂ.ಗಳು) ಅಂದಾಜು ವೆಚ್ಚದಲ್ಲಿ ಲೋಕೋಪಯೋಗಿ ಇಲಾಖೆಯ ಮೂಲಕ ಕೈಗೊಳ್ಳಲು ಸರ್ಕಾರದ ಆಡಳಿತಾತ್ಮಕ ಮಂಜೂರಾತಿಯನ್ನು ನೀಡಿದೆ. 2004-05ನೇ ಸಾಲಿನ ಆಯವ್ಯಯದಲ್ಲಿ ಸದರಿ ಕಾಮಗಾರಿ ನಿರ್ಮಾಣಕ್ಕಾಗಿ 43.00 ಲಕ್ಷ ರೂ.ಗಳ ಅನುದಾನವನ್ನು ಒದಗಿಸಿರುವ ಕಾರಣ, ಕಾಮಗಾರಿಯನ್ನು ಕೂಡಲೇ ಕೈಗೊಳ್ಳಲು ಆದೇಶಿಸಿದೆ.

ಇದರ ಮೇಲಿನ ವೆಚ್ಚವನ್ನು 2004-05ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ "4059- ಕಟ್ಟಡಗಳ ಮೇಲಿನ ಬಂಡವಾಳ' ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಲೋಕೋಪಯೋಗಿ ಇಲಾಖೆಯು ತನ್ನ ದಿನಾಂಕ: 5.2.2005ರ ಟಿಪ್ಪಣಿ ಸಂಖ್ಯೆ: ಲೋಇ 13 ಬಿಜಿಎಂ 2005ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಕೆ. ಅನುಸೂಯ**

ಪಿ.ಆರ್.275 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ತರಬೇತಿ).

**ತಿದ್ದೋಲೆ ಸಂಖ್ಯೆ: ಸಿಆಸುಇ 22 ಸಅಸೇ 2005 (2) ಬೆಂಗಳೂರು, ದಿನಾಂಕ: 22ನೇ ಫೆಬ್ರವರಿ 2005**

ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಿಆಸುಇ 22 ಸಅಸೇ 2005 (2), ದಿನಾಂಕ: 17.1.2005ರ 6ನೇ ಸಾಲಿನಲ್ಲಿನ "ವೇತನ ಶ್ರೇಣಿ ರೂ. 13820-17220ದಕ್ಕೆ" ಎಂಬುದನ್ನು ತೆಗೆದು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ಆರ್. ನಾಗೇಂದ್ರ**

ಪಿ.ಆರ್.276 ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).